# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 175 (316) |
| ಸದಸ್ಯರ ಹೆಸರು | ಶ್ರೀ ಆರ್ ಧರ್ಮಸೇನ<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | 09-12-2020 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ, ಮೀನುಗಾರಿಕೆ ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಎಷ್ಟು ದೇವಸ್ಥಾನ ಮತ್ತು ಧಾರ್ಮಿಕ ಸಂಸ್ಥೆಗಳಿಗೆ ಅನುದಾನವನ್ನು ಮಂಜೂರು ಮಾಡಲಾಗಿದೆ ಇನ್ನೂ ಅನುದಾನ ಬಾಕಿ ಇರುವ ಸಂಸ್ಥೆಗಳೆಷ್ಟು? (ಕಳೆದ ಎರಡು ವರ್ಷಗಳ ಮಾಹಿತಿ ನೀಡುವುದು) | ಕಳೆದ ಎರಡು ವರ್ಷಗಳಲ್ಲಿ ದುರಸ್ಥಿ/ಜೀರ್ಣೋದ್ಧಾರ/ನಿರ್ಮಾಣ ಯೋಜನೆಗಳಡಿ ಮೈಸೂರು ಜಿಲ್ಲೆಯ **115** ಸಂಸ್ಥೆಗಳಿಗೆ ಒಟ್ಟು ರೂ.**311.00**ಲಕ್ಷ ಮತ್ತು ಚಾಮರಾಜನಗರ ಜಿಲ್ಲೆಯ **38** ಧಾರ್ಮಿಕ ಸಂಸ್ಥೆಗಳಿಗೆ ರೂ.**132.00**ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ.<br>ಮುಂದುವರೆದು, ಆರಾಧನಾ ಯೋಜನೆ/ಪರಿಶಿಷ್ಟ ಜಾತಿ ಉಪಯೋಜನೆ/ಗಿರಿಜನ ಉಪಯೋಜನೆಯಡಿ ಮೈಸೂರು ಜಿಲ್ಲೆಗೆ ಒಟ್ಟು ರೂ.**264.34**ಲಕ್ಷಗಳ ಅನುದಾನ ಮತ್ತು ಚಾಮರಾಜನಗರ ಜಿಲ್ಲೆಗೆ ಒಟ್ಟು ರೂ.**96.12**ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದ್ದು, ಜಿಲ್ಲಾಧಿಕಾರಿಗಳು ಮಾರ್ಗಸೂಚಿಯನ್ವಯ ಧಾರ್ಮಿಕ ಸಂಸ್ಥೆಗಳನ್ನು ಆಯ್ಕೆ ಮಾಡಿ ಅನುದಾನ ಬಿಡುಗಡೆ ಮಾಡಲು ಕ್ರಮವಹಿಸುತ್ತಾರೆ.<br>ಕಳೆದ ಎರಡು ವರ್ಷಗಳ ಯೋಜನಾವಾರು/ಜಿಲ್ಲಾವಾರು ಮಾಹಿತಿಯನ್ನು **ಅನುಬಂಧದಲ್ಲಿ ಒದಗಿಸಿದೆ.** |
| ಆ) | ಹಲವಾರು ವರ್ಷಗಳಿಂದ ಅನೇಕ ದೇವಸ್ಥಾನಗಳ ಸಮಿತಿಯವರು ಅನುದಾನಕ್ಕೆ ಬೇಡಿಕೆ ಇಟ್ಟಿದ್ದರೂ, ಹಣಕಾಸಿನ ಕೊರತೆಯಿಂದ ನೀಡದಿರುವುದು ನಿಜವೇ? ಹೆಚ್ಚಿನ ಅನುದಾನವನ್ನು ಆರ್ಥಿಕ ಇಲಾಖೆಯಿಂದ ಪಡೆದು ಹೆಚ್ಚು ಧಾರ್ಮಿಕ ಸಂಸ್ಥೆ ಮತ್ತು ದೇವಾಲಯಗಳಿಗೆ ಅನುದಾನ ಮಂಜೂರು ಮಾಡಲು ಸರ್ಕಾರ ಕ್ರಮ ಕೈಗೊಳ್ಳುತ್ತದೆಯೇ. | ಹಲವಾರು ವರ್ಷಗಳಿಂದ ಅನೇಕ ದೇವಸ್ಥಾನಗಳ ಸಮಿತಿಯವರು ಅನುದಾನಕ್ಕೆ ಬೇಡಿಕೆ ಇಟ್ಟಿದ್ದರೂ ಹಣಕಾಸಿನ ಕೊರತೆಯಿಂದ ಅನುದಾನ ನೀಡದಿರುವುದು ನಿಜವಾಗಿರುತ್ತದೆ.<br>ಆಯಾ ಆರ್ಥಿಕ ವರ್ಷಗಳಲ್ಲಿ ಬೇಡಿಕೆಗಳನುಸಾರವಾಗಿ ಪ್ರಸ್ತಾವನೆಗಳನ್ನು ಆರ್ಥಿಕ ಇಲಾಖೆಗೆ ಹೆಚ್ಚುವರಿ ಅನುದಾನ ಕೋರಲಾಗುತ್ತದೆ. ಆರ್ಥಿಕ ಇಲಾಖೆಯು ಒದಗಿಸುವ ಅನುದಾನಕ್ಕೆ ಅನುಗುಣವಾಗಿ ಬೇಡಿಕೆಗಳನ್ನು ಪರಿಶೀಲಿಸಿ, ಅನುದಾನ ಮಂಜೂರು ಮಾಡಲು ನಿಯಮಾನುಸಾರ ಕ್ರಮ ವಹಿಸಲಾಗುತ್ತಿದೆ. |

......2

| | | |
|---|---|---|
| ಇ) | ಅನುದಾನ ನೀಡುವಾಗ ಶಾಸಕರು ಮತ್ತಿತರ ಜನಪ್ರತಿನಿಧಿಗಳು ಮಾಡುವ ಶಿಫಾರಸ್ಸುಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದೇ; ಈ ಬಗ್ಗೆ ಸರ್ಕಾರ ಅನುಸರಿಸುವ ಕ್ರಮಗಳೇನು? | ಅನುದಾನ ನೀಡುವಾಗ ಶಾಸಕರು, ಗಣ್ಯವ್ಯಕ್ತಿಗಳು, ಜನಪ್ರತಿನಿಧಿಗಳು ಹಾಗೂ ಸಾರ್ವಜನಿಕರ ಮನವಿ ಶಿಫಾರಸ್ಸುಗಳನ್ನು ನಿಯಮಾನುಸಾರ ಪರಿಶೀಲಿಸಿ, ಆಯವ್ಯಯದ ಲಭ್ಯತೆಗನುಗುಣವಾಗಿ ಅನುದಾನ ಮಂಜೂರು ಮಾಡಲಾಗುತ್ತಿದೆ. |

ಸಂಖ್ಯೆ: ಕಂಇ 168 ಮುಸಪ್ರ 2020

(ಕೋಟ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ,
ಮೀನುಗಾರಿಕೆ ಹಾಗೂ ಬಂದರು
ಮತ್ತು ಒಳನಾಡು ಜಲಸಾರಿಗೆ ಸಚಿವರು

# ಅನುಬಂಧ

| ದುರಸ್ಥಿ/ಜೀರ್ಣೋದ್ಧಾರ/ನಿರ್ಮಾಣ (ಮೊತ್ತ ರೂ.ಲಕ್ಷಗಳಲ್ಲಿ) | | | | |
|---|---|---|---|---|
| ಜಿಲ್ಲೆ | 2018-19 | | 2019-20 | |
| | ಸಂಸ್ಥೆ | ಮೊತ್ತ | ಸಂಸ್ಥೆ | ಮೊತ್ತ |
| ಮೈಸೂರು | 42 | 106.00 | 73 | 205.00 |
| ಚಾಮರಾಜನಗರ | 26 | 73.00 | 12 | 59.00 |
| ಒಟ್ಟು | 68 | 179.00 | 85 | 264.00 |

| ಜಿಲ್ಲೆ | ಯೋಜನೆ | 2018-19 | 2019-20 |
|---|---|---|---|
| ಮೈಸೂರು | ಆರಾಧನಾ | 46.64 | 46.64 |
| | ಪರಿಶಿಷ್ಟ ಉಪಯೋಜನೆ | 74.36 | 74.36 |
| | ಗಿರಿಜನ ಉಪಯೋಜನೆ | 11.17 | 11.17 |
| ಒಟ್ಟು | | 132.17 | 132.17 |
| ಚಾಮರಾಜನಗರ | ಆರಾಧನಾ | 16.96 | 16.96 |
| | ಪರಿಶಿಷ್ಟ ಉಪಯೋಜನೆ | 27.04 | 27.04 |
| | ಗಿರಿಜನ ಉಪಯೋಜನೆ | 4.06 | 4.06 |
| ಒಟ್ಟು | | 48.06 | 48.06 |

M. L. Varalakshmi
(ಎಂ.ಎಲ್. ವರಲಕ್ಷ್ಮಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ
(ಹಿಂದೂ ಧಾರ್ಮಿಕ ದತ್ತಿ ಇಲಾಖೆ)